# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1547

ಮಾನ್ಯ ಸದಸ್ಯರ ಹೆಸರು : ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರಿ ನೌಕರನು ಎನ್.ಪಿ.ಎಸ್. ಯೋಜನೆಯನ್ನು ಕೈಬಿಟ್ಟು ಹಳೆ ಪಿಂಚಣಿ ವ್ಯವಸ್ಥೆ ಜಾರಿ ಮಾಡುವಂತೆ ನಡೆಸಿರುವ ಪ್ರತಿಭಟನೆಗಳು ಮತ್ತು ಸದರಿ ನೌಕರ ಸಂಘಗಳು ಮಾಡಿರುವ ಮನವಿಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರವು ವಹಿಸಿರುವ ಕ್ರಮಗಳೇನು. | ಬಂದಿದೆ.<br><br>ಸರ್ಕಾರವು ನೂತನ ಪಿಂಚಣಿ ಯೋಜನೆಗೆ ಸೂಕ್ತ ಬದಲಾವಣೆ / ಮಾರ್ಪಾಡು ಮಾಡಲು ಸರ್ಕಾರದ ಆದೇಶ ಸಂಖ್ಯೆ: ಆಇ 107 ಪಿಇಎನ್ 2018, ದಿನಾಂಕ: 11.12.2018 ರನ್ವಯ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಿದೆ. |
| ಆ) | ಹಳೆ ಪಿಂಚಣಿ ವ್ಯವಸ್ಥೆ ಸಾಧಕ-ಬಾಧಕಗಳ ಬಗ್ಗೆ ಪರಿಶೀಲನೆ ಮಾಡಲು ರಚಿಸಿರುವ ಅಧಿಕಾರಿಗಳ ಸಮಿತಿಯ ಇಲ್ಲಿಯವರೆಗೆ ಎಷ್ಟು ಸಭೆಗಳನ್ನು ನಡೆಸಿದೆ; ಈ ಸಮಿತಿ ಸಲ್ಲಿಸಿರುವ ಅಧ್ಯಯನ ವರದಿಯ ವಿವರಗಳೇನು; ಈ ವರದಿಯ ಮೇಲೆ ಸರ್ಕಾರ ಕೈಗೊಂಡಿರುವ ಕ್ರಮಗಳ ಬಗ್ಗೆ ಮಾಹಿತಿ ನೀಡುವುದು; | ಸಮಿತಿಯು ಇದುವರೆವಿಗೂ ಎರಡು ಸಭೆಯನ್ನು ನಡೆಸಿದೆ.<br><br>ಸಮಿತಿಯ ವರದಿಯನ್ನು ನಿರೀಕ್ಷಿಸಲಾಗಿದೆ. |
| ಇ) | ಎನ್.ಪಿ.ಎಸ್. ಯೋಜನೆ ಜಾರಿ ಮಾಡಿದ್ದಲ್ಲಿ ಸರ್ಕಾರಕ್ಕೆ ಆಗಬಹುದಾದ ಲಾಭ – ನಷ್ಟಗಳ ಬಗ್ಗೆ ಪರಿಶೀಲನೆ ನಡೆಸಲಾಗಿದೆಯೇ; ನಡೆಸಿದ್ದಲ್ಲಿ ಲಾಭ- ನಷ್ಟಗಳ ವಿವರ ನೀಡುವುದು. | ಹಳೆಯ ಪಿಂಚಣಿ ಯೋಜನೆಯ ಆರ್ಥಿಕ ಹೊರೆಯನ್ನು ನಿಭಾಯಿಸಲು ಸಾಕಷ್ಟು ನಿಧಿಯ ಆಧಾರ ಇಲ್ಲದಿರುವುದರಿಂದ ಹಾಗೂ ರಿಸರ್ವ್ ಬ್ಯಾಂಕ್ ರವರು ರಚಿಸಿದ ಸಮಿತಿಯ ವರದಿಯ ಶಿಫಾರಸ್ಸಿನ ಆಧಾರದ ಮೇಲೆ |

| | | |
|---|---|---|
| | | ಕೇಂದ್ರ ಸರ್ಕಾರವು ನೂತನ ಪಿಂಚಣಿ ಯೋಜನೆಯನ್ನು ದಿನಾಂಕ:01.01.2004 ರಿಂದ ಜಾರಿಗೊಳಿಸಿರುತ್ತದೆ. ಅದರಂತೆಯೇ ಇತರೆ ರಾಜ್ಯಗಳು ಈ ಯೋಜನೆಯನ್ನು ಅಳವಡಿಸಿಕೊಂಡ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯವು ಕೂಡ ಸರ್ಕಾರದ ಆದೇಶ ಸಂಖ್ಯೆ: ಆಇ (ಎಸ್.ಪಿ.ಎಲ್.) 04 ಪಿಇಟಿ 2005, ದಿನಾಂಕ:31.03.2006 ರನ್ವಯ ದಿನಾಂಕ:01.04.2006 ರಂದು ಮತ್ತು ತದನಂತರ ಸರ್ಕಾರಿ ಸೇವೆಗೆ ಸೇರುವ ನೌಕರರಿಗೆ ನೂತನ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಿರುತ್ತದೆ |
| ಈ) | ಎನ್.ಪಿ.ಎಸ್. ಯೋಜನೆ ಅಥವಾ ಹಳೆ ಪಿಂಚಣಿ ವ್ಯವಸ್ಥೆಯನ್ನು ಆಯ್ಕೆ ಮಾಡಿಕೊಳ್ಳುವ ಸಂಬಂಧ ರಾಜ್ಯ ಸರ್ಕಾರಿ ನೌಕರರಿಗೆ one time measurement ಆಯ್ಕೆ ಮಾಡಿಕೊಳ್ಳುವ ವಿಚಾರವಾಗಿ ಸರ್ಕಾರದ ನಿಲುವೇನು; | ದಿನಾಂಕ: 01.04.2006ರಂದು ಮತ್ತು ತದನಂತರ ಸರ್ಕಾರದ ಸೇವೆಗೆ ಸೇರುವ ನೌಕರರಿಗೆ ನೂತನ ಪಿಂಚಣಿ ಯೋಜನೆಯನ್ನು ಕಡ್ಡಾಯವಾಗಿ ಜಾರಿಗೊಳಿಸಲಾಗಿರುತ್ತದೆ. ಆದ್ದರಿಂದ ಒಂದು ಬಾರಿಯ ಆಯ್ಕೆಗೆ ಅವಕಾಶ ಕಲ್ಪಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಉ) | ರಾಜ್ಯದಲ್ಲಿ ಎಷ್ಟು ಸರ್ಕಾರಿ ನೌಕರರು ಎನ್.ಪಿ.ಎಸ್. ಯೋಜನೆಗೆ ಒಳಪಡುತ್ತಾರೆ; ರಾಜ್ಯ ಸರ್ಕಾರಿ ನೌಕರರಿಗೆ ಜಾರಿ ಮಾಡಿರುವ ಎನ್.ಪಿ.ಎಸ್. ಯೋಜನೆಯನ್ನು ಹಿಂಪಡೆದು ಹಳೆ ಪಿಂಚಣಿ ವ್ಯವಸ್ಥೆಯನ್ನು ಸರ್ಕಾರಿ ನೌಕರರಿಗೆ ನೀಡಲು ಸರ್ಕಾರಕ್ಕಿರುವ ತೊಂದರೆಗಳೇನು? (ವಿವರ ನೀಡುವುದು). | ದಿನಾಂಕ: 01.03.2021ರಲ್ಲಿದ್ದಂತೆ ರಾಜ್ಯದಲ್ಲಿ ಒಟ್ಟು 2,41,672 ಸರ್ಕಾರಿ ನೌಕರರು ಎನ್.ಪಿ.ಎಸ್. ಯೋಜನೆಗೆ ಒಳಪಡುತ್ತಾರೆ.<br><br>ರಾಜ್ಯ ಸರ್ಕಾರಿ ನೌಕರರಿಗೆ ಜಾರಿ ಮಾಡಿರುವ ಎನ್.ಪಿ.ಎಸ್. ಯೋಜನೆಯನ್ನು ಈಗ ರದ್ದುಪಡಿಸಿದರೆ ಸರ್ಕಾರದ ಆರ್ಥಿಕ ಸ್ಥಿತಿಯ ಮೇಲೆ ತೀವ್ರ ಪರಿಣಾಮ ಬೀರುವ ಸಂಭವವಿರುತ್ತದೆ. |

ಆಇ 55 ಪಿಇಎನ್ 2021

ಬಿಎಸ್

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ